| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 4. | **Progeny Trial Plots** | | | | | | |
| | Bangalore | Bommanahalli / Jarakabande kaval | 5 | 17600 | 88000.00 | 2200.00 | |
| | Mandya | Mallimagere | 10 | 17600 | 176000.00 | 4400.00 | |
| | Hoskote | Nallal-A, B, C | 5 | 17600 | 88000.00 | 2200.00 | |
| | Tumkur | Ankapura | 5 | 17600 | 88000.00 | 2200.00 | |
| | Kolar | Hadigere | 5 | 17600 | 88000.00 | 2200.00 | |
| | **Total** | | **30** | | **528000.00** | | |
| II | **Monsoon works** | | | | | | |
| a. | **Pitting works (including Dozing) : (BACKLOG)** | | | | | | |
| 1. | **Seedling Seed Orchards** | | | | | | |
| | **Hoskote** | Nallal-A, B, C / Gottipura | 5 | 17200 | 86000.00 | 2200.00 | |
| 2. | **Progeny Trial Plots** | | | | | | |
| | **Hoskote** | Nallal-A, B, C / Gottipura | 5 | 19000 | 95000.00 | 2400.0 | |
| III | **Planting and Other works : (BACKLOG)** | | | | | | |
| 1. | **Clonal Seed Orchards** | | | | | | |
| | Mandya | C.M. Gudda | 10 | 24200 | 242000.00 | 6100.00 | |
| | Kolar | Yeshwanthpura / Hadigere | 5 | 24200 | 121000.00 | 3100.00 | |
| | **Total** | | **15** | | **363000.00** | | |
| 2. | **Seedling Seed Orchards** | | | | | | |
| | Mandya | Mallimagere | 5 | 18700 | 93500.00 | 2400.00 | |
| | Hoskote | Nallal-A, B | 5 | 18700 | 93500.00 | 2400.00 | |
| | Tumkur | Ankapura | 5 | 18700 | 93500.00 | 2400.00 | |
| | Kolar | K.S. Gida | 5 | 18700 | 93500.00 | 2400.00 | |
| | **Total** | | **20** | | **374000.00** | | |
| 3. | **Vegetative Multiplication Gardens** | | | | | | |
| | Mandya | C.M. Gudda | 5 (Non-Euc) | 27500 | 137500.00 | 3500.00 | |
| | Hoskote | Nallal-B | 5 (Non-Euc) | 27500 | 137500.00 | 3500.00 | |
| | Tumkur | Ankapura | 5 (Non-Euc) | 27500 | 137500.00 | 3500.00 | |
| | Kolar | Yeshwanthpura | 5 (Non-Euc) | 27500 | 137500.00 | 3500.00 | |
| | **Total** | | **20** | | **550000.00** | | |
| 4. | **Progeny Trial Plots** | | | | | | |
| | Mandya | Mallimagere | 5 | 17600 | 88000.00 | 2200.00 | |
| | Hoskote | Nallal-A, B, C / Gottipura | 5 | 17600 | 88000.00 | 2200.00 | |
| | Kolar | Hadigere | 5 | 17600 | 88000.00 | 2200.00 | |
| | **Total** | | **15** | | **264000.00** | | |
| 5. | **Germ Plasm Banks** | | | | | | |
| | Mandya | Mallimagere | 5 | 17600 | 88000.00 | 2200.00 | |
| | Kolar | Yeshwanthpura / Hadigere | 5 | 17600 | 88000.00 | 2200.00 | |
| | **Total** | | **10** | | **176000.00** | | |

ಟೆಂಡರ್ ನಮೂನೆಯನ್ನು ದಿನಾಂಕ: 16–05–2008 ರಂದು ಮಧ್ಯಾಹ್ನ 1.00 ಗಂಟೆವರೆಗೆ ಕಚೇರಿ ವೇಳೆಯಲ್ಲಿ ನೀಡಲಾಗುವುದು. ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದಲ್ಲಿ ಟೆಂಡರ್ ನಮೂನೆಯನ್ನು ದಿನಾಂಕ: 21–05–2008 ರಂದು ಮಧ್ಯಾಹ್ನ 1.00 ಗಂಟೆಯವರೆಗೆ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ,

ಬೆಂಗಳೂರು (Conservator of Forests, Research, Bangalore) ಇವರ ಹೆಸರಿಗೆ ಷೆಡ್ಯೂಲ್ ಕಾಲಂ ಸಂಖ್ಯೆ: 7 ರಲ್ಲಿರುವಂತೆ ಪ್ರತ್ಯೇಕವಾಗಿ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಚೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

**ನಿಬಂಧನೆಗಳು**

1. ಟೆಂಡರ್‌ನಲ್ಲಿ ಭಾಗವಹಿಸುವವರು ಈ ವೃತ್ತದಲ್ಲಿ 2008–09ನೇ ಸಾಲಿಗೆ ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು.
2. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ. 200.00 (ತೆರಿಗೆ ಪ್ರತ್ಯೇಕ) ಪಾವತಿ ಮಾಡಿ ದಿನಾಂಕ: 16–05–2008 ಮತ್ತು 21–05–2008 ರಂದು ಕಚೇರಿ ಕೆಲಸದ ವೇಳೆಯಲ್ಲಿ 1.00 ಗಂಟೆಯವರೆಗೆ ಪಡೆಯತಕ್ಕದ್ದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ವಲಯವಾರು ಮತ್ತು ಕೆಲಸವಾರು ಮೊಹರು ಮಾಡಿ ಸಲ್ಲಿಸುವುದು.
4. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 16–05–2008 ರಂದು ಅಪರಾಹ್ನ 3.00 ಗಂಟೆಯವರೆಗೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 21–05–2008 ರಂದು ಅಪರಾಹ್ನ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
5. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಈ ಎಲ್ಲಾ ಕೆಲಸಗಳನ್ನು ಋತುಮಾನಕ್ಕೆ ಅನುಗುಣವಾಗಿ (ಕಾಲಬದ್ಧ) ಆಯಾ ವಲಯ ಅರಣ್ಯಾಧಿಕಾರಿಗಳ ನಿರ್ದೇಶನ ಮತ್ತು ಮೇಲಧಿಕಾರಿಗಳ ನಿರ್ದೇಶನದಂತೆಯೂ ಜಾರಿಗೊಳಿಸಲು ಬದ್ಧರಾಗಿರಬೇಕು. ಮೇಲಿನ ಕೆಲಸಗಳು ಕಾಲಬದ್ಧವಾಗಿದ್ದು, ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್‌ಗೆ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ ಮತ್ತು ಸ್ಥಳ ಬದಲಾವಣೆಯಾದರೂ ಸಹ ಕೆಲಸಗಳನ್ನು ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ಪೂರ್ಣಗೊಳಿಸಬೇಕಾಗುತ್ತದೆ.
6. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಯನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳ ವ್ಯವಸ್ಥೆಯನ್ನು ಸ್ವತಂತ್ರವಾಗಿ ಮಾಡಿಕೊಳ್ಳಬೇಕು.
7. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇ.ಎಂ.ಡಿ ಮೊತ್ತಕ್ಕೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು (Conservator of Forests, Research, Bangalore) ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿ.ಡಿ. ರೂಪದಲ್ಲಿ ಪಡೆದು ಪಾವತಿಸಬೇಕಾಗಿರುತ್ತದೆ.
8. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
9. ನಿಗಧಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸುವುದಿಲ್ಲ.
10. ಯಾವುದೇ ಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.
11. ಈ ಮೇಲಿನ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳಿಸುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣಕ್ಕೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ಸಹಾಯಕ ಅರಣ್ಯ ಕೃಷಿಕರುಗಳಿಂದ ತನಿಖೆ ಮಾಡಿಸಿ, ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಕ್ಷೇತ್ರ ಟಿಪ್ಪಣಿ ಪುಸ್ತಕ‌ದೊಂದಿಗೆ (ಎಫ್.ಎನ್.ಬಿ.) ಒಪ್ಪಿಸಬೇಕಾಗುತ್ತದೆ. ಬಿಲ್ ಹಣ ಸಂದಾಯ ಮಾಡುವಾಗ ಬಿಲ್‌ಗಳಲ್ಲಿ ನಿಯಮದಂತೆ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಯನ್ನು ಕಡಿತಗೊಳಿಸಲಾಗುವುದು, ಮತ್ತು ಆಗಿಂದಾಗ್ಗೆ ತೆರಿಗೆಗಳು ವ್ಯತ್ಯಾಸವಾದರೂ ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು / ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದ್ದಲ್ಲಿ, ಗಿಡ, ಮರಗಳನ್ನು ಕಡಿದು ನಾಶಪಡಿಸಿದ್ದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು / ಬಿಲ್ಲುಗಳಲ್ಲಿ ಕಟಾವು ಮಾಡಲಾಗುವುದು ಮತ್ತು ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಚೇರಿಯ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
14. ಟೆಂಡರ್‌ನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು "ಕರ್ನಾಟಕ ಸಾರ್ವಜನಿಕ ಸಂಗ್ರಹಣದಲ್ಲಿ ಪಾರದರ್ಶಕತೆ ಕಾಯ್ದೆ 1999 ಕಾಲಂ 27 (1) (ಎ)" ದಂತೆ ಮೇಲೆ ನಮೂದಿಸಿದ ರೀತಿಯ ಕೆಲಸಗಳನ್ನು ಕರ್ನಾಟಕ ಅರಣ್ಯ ಇಲಾಖೆಯ ಯಾವುದೇ ವಿಭಾಗದಲ್ಲಿ ಕನಿಷ್ಠ ಒಂದು ವರ್ಷ ಸಮರ್ಪಕವಾಗಿ ನಿರ್ವಹಿಸಿದ ಅನುಭವ ಹೊಂದಿರಬೇಕು, ಹಾಗೂ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ದೃಢೀಕೃತ ಪತ್ರಗಳನ್ನು ಒದಗಿಸಬೇಕು.
15. ಯಾವುದೇ ಅರಣ್ಯ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.

ಅರಣ್ಯ ಸಂರಕ್ಷಣಾಧಿಕಾರಿ,
ಸಂಶೋಧನೆ, ಬೆಂಗಳೂರು.

ಪಿ.ಆರ್. 258

**ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು**

**ಅಧಿಸೂಚನೆ**

**ಸಂಖ್ಯೆ: ಎ2/ಹರಾಜು/ಸಿಆರ್–1/2008-09, ದಿನಾಂಕ: 02ನೇ ಮೇ 2008.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ ಸಾಗುವಾನಿ ಇತರೆ ಜಾತಿಯ ನಾಟಾ ಹಾಗೂ ಸೌದೆಗಳನ್ನು ಡಿಪೋವಿನ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ವಿಭಾಗದ ಮತ್ತು ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ/ಸೌದೆಯ ಅಂದಾಜು ಪ್ರಮಾಣ (ಘ.ಮೀ. ಗಳಲ್ಲಿ) | | | | | |
|---|---|---|---|---|---|---|---|---|
| | | | ಬೀಟೆ | ಸಾಗುವಾನಿ | ಕಾಡು ಜಾತಿ ಇತರೆ ಜಾತಿಯ ನಾಟ | ಬಿಲೆಟ್ಸ್ | ಸೌದೆ | ಪೋಲ್ಸ್ (ಸಂಖ್ಯೆ) |
| 1 | 2 | 3 | 4 | 5 | 6 | 8 | 9 | 10 |
| I a) | **ಚಿಕ್ಕಮಗಳೂರು ವಿಭಾಗ:** ಕಡೂರು ಸರ್ಕಾರಿ ನಾಟಾ ಸಂಗ್ರಹಾಲಯ | 24-05-08 | 6.200 | - | 16.402 ಹೊನ್ನೆ<br>72.882 ನಂದಿ<br>1.714 ಮತ್ತಿ<br>7.531 ಹುನಾಲು<br>11.524 ತಡಸಲು<br>8.203 ನೇರಲು<br>5.806 ತಾರೆ<br>88.668 ಕಾಡು ಜಾತಿ<br>0.448 ಶಿವನೆ | – | 10.800 ಬೀಟೆ | - |
| b) | ಚಿಕ್ಕಮಗಳೂರು ಸೆಂಟ್ರಲ್ ನಾಟಾ ಸಂಗ್ರಹಾಲಯ | 25-05-08 | - | - | - – | - | 24.150 ಕಾಡು ಜಾತಿ<br>108.850 ಅಕೇಶಿಯಾ | 129 ಅಕೇಶಿಯಾ<br>83 ಕ್ಯಾಜುರಿನಾ |
| II a) | **ಕೊಪ್ಪ ವಿಭಾಗ:** ನರಸಿಂಹರಾಜಪುರ ಸರ್ಕಾರಿ ನಾಟಾ ಸಂಗ್ರಹಾಲಯ | 26-05-08<br>27-05-08 | 0.731 | - | 4.082 ನಂದಿ<br>500.000 ಅಕೇಶಿಯಾ<br>4.767 ಹುನಾಲು<br>3.616 ಮತ್ತಿ<br>8.117 ಇತರೆ ಜಾತಿ | 187.554 ಅಕೇಶಿಯಾ | 50.000 ಎಫ್‌ಓಸಿ ಸೌದೆ | 1000 ಅಕೇಶಿಯಾ |
| b) | ಸಂಗಮೇಶ್ವರಪೇಟೆ ನಾಟಾ ಸಂಗ್ರಹಾಲಯ | 28-05-08 ಮತ್ತು 29-05-08 ರಂದು ಅರ್ಧ ದಿನ (ಪೂರ್ವಾಹ್ನ) | 9.316 | - | 43.498 ಹೊನ್ನೆ<br>44.737 ಮತ್ತಿ<br>8.591 ನಂದಿ<br>450.000 ಅಕೇಶಿಯಾ<br>191.921 ಇತರೆ ಜಾತಿ | – | – | – |

ಅರಣ್ಯ ಸಂರಕ್ಷಣಾಧಿಕಾರಿ
ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು

ಪಿ.ಆರ್. 261

## ಅರಣ್ಯ ಇಲಾಖೆ
## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ
## ಅಧಿಸೂಚನೆ

**ಸಂಖ್ಯೆ:ಎ4–ಎಸ್‌ಎಎಸ್–ಸಿಆರ್–2/08–09, ದಿನಾಂಕ: 2ನೇ ಮೇ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ನಮೂದಿಸಿದ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ, ಅಕೇಶಿಯಾ ಇತರೆ ಜಾತಿಯ ನಾಟಾಗಳು ಎಳೆಗಳು ಮತ್ತು ಸೌದೆ ಇತ್ಯಾದಿಯನ್ನು ಆಯಾ ಡಿಪೋವಿನ ಹೆಸರಿನ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗೆ ಪ್ರಕಟಿಸಿದೆ.

| ಕ್ರ. ಸಂ. | ಡಿಪೋದ ಹೆಸರು | ಹರಾಜು ದಿನಾಂಕ | ಹರಾಜಿಗಿಟ್ಟ ನಾಟಾ, ಪೋಲ್ಸ್, ಸೌದೆ, ಬಿಲ್ಲೆಟ್ಸ್ ಇತ್ಯಾದಿ ಅಂದಾಜು ಪ್ರಮಾಣ | | | | | | | | | | | |
|---|---|---|---|---|---|---|---|---|---|---|---|---|---|---|
| | | | ಬೀಟೆ | ಸಾಗುವಾನಿ | ಇತರೆ ಜಾತಿ | ಅಕೇಶಿಯಾ ನಾಟಾ | ನೀಲಗಿರಿ/ ಗಾಳಿ ನಾಟ | ಅಕೇಶಿಯಾ / ನೀಲಗಿರಿ ಪೋಲ್ಸ್ | ಬಳ್ಳೀಸ್ | ಬಿಲ್ಲೇಟ್ಸ್ | FOC ಸೈಜು | ಸೌದೆ | | |
| | | | | | | | | | | | | ಅಕೇಶಿಯಾ | ಕಾಡುಜಾತಿ | ಬೀಟೆ |
| | | | ಘ.ಮೀ | ಘ.ಮೀ | ಘ.ಮೀ | ಘ.ಮೀ | ಘ.ಮೀ | ಸಂಖ್ಯೆ | ಸಂಖ್ಯೆ | ಘ.ಮೀ | ಘ.ಮೀ | ಘ.ಮೀ | ಘ.ಮೀ | ಘ.ಮೀ |
| 1 | ಸರ್ಕಾರಿ ನಾಟಾ ಡಿಪೋ ಆಲ್ಕೋಳ ಶಿವಮೊಗ್ಗ | 05.06.08 ಮತ್ತು 06.06.08 | 7.500 (ಖಾಸಗಿ) 12.500 | 36.500 | 721.700 | 1.700 | – | 1135 (ಅಕೇಶಿ) 46 (ಟೀಕ್) | 104 (ಟೀಕ್) | 0.191 (ಬೀಟೆ.ಖಾ) | 2.700 (ಬೀಟೆ) 1.600 (ಟೀಕ್) | – | 108.500 4.500 (ಟೀಕ್) | 5.500 (ಖಾಸಗಿ) |
| 2 | ಸರ್ಕಾರಿ ನಾಟಾ ಡಿಪೋ ಕುರುವಳ್ಳಿ ತೀರ್ಥಹಳ್ಳಿ | 07.06.08 | 4.500 (ಖಾಸಗಿ) 2.591 | 1.139 | 27.500 | 217.100 | 13.000 (ನೀಲಗಿರಿ) 1.500 (ಗಾಳಿ) | 1115 (ಅಕೇಶಿ) 70 (ನೀಲ + ಗಾಳಿ) | – | 90.000 (ಅಕೇಶಿಯಾ) | – | 210.000 | 76.000 | – |

**ಟಿಪ್ಪಣಿ:** 1. ಈ ಮೇಲಿನ ಸರಕು ಪ್ರಮಾಣ ಅಂದಾಜು ಇರುತ್ತದೆ.

2. ಮಾರಾಟದ ಅಧಿಸೂಚನೆಯ ಪ್ರತಿಗಳಿಗಾಗಿ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯ ವೇಳೆಯಲ್ಲಿ (ರಜಾ ದಿನಗಳನ್ನು ಹೊರತುಪಡಿಸಿ) ಸಂಪರ್ಕಿಸುವುದು.

**ಬ್ರೀಜೇಶ್ ಕುಮಾರ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್. 269

**ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ**
**ಆನಂದರಾವ್ ವೃತ್ತ ಬೆಂಗಳೂರು–9**
**ಅಧಿಸೂಚನೆ**

**ಸಂಖ್ಯೆ: ವೈಶಿನಿ/ಎನ್‌ಆರ್‌ಸಿ(2) 2/2008–09, ದಿನಾಂಕ: 03ನೇ ಮೇ 2008.**

**ವಿಷಯ:–** 2008–09ನೇ ಸಾಲಿನ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಹ ಅಭ್ಯರ್ಥಿಗಳಿಂದ ನಿಗಧಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

1) ಈ ಕೆಳಗೆ ನಮೂದಿಸಿರುವ (ಅನುಬಂಧ–1)ರಲ್ಲಿನ 09(ಒಂಭತ್ತು) ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಶುಶ್ರೂಷಾ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಗಳನ್ನು ಸಂಬಂಧಿಸಿದ ಅಂದರೆ, ಅಭ್ಯರ್ಥಿ ಆಯ್ಕೆ ಬಯಸುವ ಸಂಸ್ಥೆಯ ವೈದ್ಯಕೀಯ ಅಧೀಕ್ಷಕರು, / ಜಿಲ್ಲಾ ಶಸ್ತ್ರಚಿಕಿತ್ಸಕರು / ಪ್ರಾಂಶುಪಾಲರುಗಳಿಂದ ಕಚೇರಿ ವೇಳೆಯಲ್ಲಿ 10.00 ಘಂಟೆಯಿಂದ ಸಂಜೆ 4.00 ಘಂಟೆಯವರೆಗೆ ಅರ್ಜಿ ಶುಲ್ಕ ರೂ. 100/– (ಪಜಾ / ಪಪಂ, ವರ್ಗ–1 ಕ್ಕೆ ರೂ. 50/–) ಗಳನ್ನು ಡಿ.ಡಿ.ಮೂಲಕ ಸಂದಾಯ ಮಾಡಿ ನಿಯಮಿತ ಅರ್ಜಿಯನ್ನು ಪಡೆದು, ಭರ್ತಿ ಮಾಡಿದ ಅರ್ಜಿಯನ್ನು ಅರ್ಜಿ ಪಡೆದ ಶುಶ್ರೂಷಾ ಶಾಲೆಗೆ ನೇರವಾಗಿ ಸಲ್ಲಿಸತಕ್ಕದ್ದು.

**ಅರ್ಜಿ ವಿತರಿಸುವ ದಿನಾಂಕ ಮತ್ತು ದೊರೆಯುವ ಸ್ಥಳ ಈ ಕೆಳಗಿನಂತಿದೆ:**

ಅ) ದಿನಾಂಕ: 16–5–2008 ರಿಂದ ಅರ್ಜಿ ವಿತರಿಸಲಾಗುವುದು.
ಆ) ದಿನಾಂಕ: 02–6–2008 ರಂದು ಅರ್ಜಿ ವಿತರಿಸಲು ಕೊನೆಯ ದಿನಾಂಕ
ಇ) ದಿನಾಂಕ: 04–6–2008 ರಂದು ಭರ್ತಿ ಮಾಡಿದ ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ

ವಿಕ್ಟೋರಿಯ ಅಸ್ಪತ್ರೆ / ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಬೆಂಗಳೂರು /ಕೆ.ಆರ್.ಆಸ್ಪತ್ರೆ, ಮೈಸೂರು / ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ ಮಂಗಳೂರು / ಸಿ.ಜಿ.ಅಸ್ಪತ್ರೆ, ದಾವಣಗೆರೆ / ಜಿಲ್ಲಾ ಆಸ್ಪತ್ರೆ ಬೆಳಗಾಂ / ಬಿಜಾಪುರ / ಚಿತ್ರದುರ್ಗ / ಬಳ್ಳಾರಿ .

2) ಅಂಚೆ ಮೂಲಕ ಅರ್ಜಿಯನ್ನು ಪಡೆಯಬಯಸುವವರು ಅರ್ಜಿ ಶುಲ್ಕ ರೂ.100/–(ಪಜಾ, ಪಪಂ, ವರ್ಗ–1 ಕ್ಕೆ ರೂ. 50/–) ರ ಡಿ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ವೈದ್ಯಕೀಯ ಅಧೀಕ್ಷಕರು / ಜಿಲ್ಲಾ ಶಸ್ತ್ರಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ಇವರ ಹೆಸರಿನಲ್ಲಿ ಪಡೆದು ಜೊತೆಗೆ ಸ್ವವಿಳಾಸವಿರುವ 30 X 12 ರ ಲಕೋಟೆಗೆ (ಈಗಿರುವ ಅಂಚೆ ದರದಂತೆ) ಅಂಚೆ ಚೀಟಿ ಹಚ್ಚಿ ನೀವು ಆಯ್ಕೆ ಬಯಸುವ ಸಂಸ್ಥೆಯ ವೈದ್ಯಕೀಯ ಅಧೀಕ್ಷಕರುಗಳು ಹಾಗೂ ಜಿಲ್ಲಾ ಶಸ್ತ್ರಚಿಕಿತ್ಸಕರುಗಳಿಗೆ ಕಳುಹಿಸಿ ಅರ್ಜಿಯನ್ನು ನಿಗಧಿತ ದಿನಾಂಕದೊಳಗೆ ಪಡೆಯಬಹುದಾಗಿದೆ.

3) ಡಿ.ಡಿ.ಯಾಗಲಿ ಅಥವಾ ಅರ್ಜಿಯನ್ನಾಗಲಿ ಯಾವುದೇ ಕಾರಣಕ್ಕೂ ಈ ನಿರ್ದೇಶನಾಲಯಕ್ಕೆ ಕಳುಹಿಸಬಾರದು. ಒಂದು ವೇಳೆ ಕಳುಹಿಸಿದಲ್ಲಿ ಅಂಥಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

4) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 44 ಎಂಪಿಎಸ್ 2003(3) ದಿನಾಂಕ: 3–7–2003 ಹಾಗೂ ಸರ್ಕಾರದ ಪತ್ರ ಸಂಖ್ಯೆ: ಆಕುಕ 76 ಎಂಎಂಇ 2007 ದಿನಾಂಕ: 2–1–2008ರ ಪ್ರಕಾರ ಶುಶ್ರೂಷಾ ತರಬೇತಿಗೆ ಅರ್ಜಿ ಸಲ್ಲಿಸಲು ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

ಎ. ಅಭ್ಯರ್ಥಿಗಳು ಕರ್ನಾಟಕ ರಾಜ್ಯದವರಾಗಿರಬೇಕು.

ಬಿ. ಅಭ್ಯರ್ಥಿಯ ವಯಸ್ಸು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ 17 ವರ್ಷ ತುಂಬಿರಬೇಕು, 35 ವರ್ಷಗಳು ಮೀರಿರಬಾರದು. ಇಲಾಖಾ ಅಭ್ಯರ್ಥಿಗಳಿಗೆ 48 ವರ್ಷ ಮೀರಿರಬಾರದು.

ಸಿ. **ವಿದ್ಯಾರ್ಹತೆ:–** ಅಭ್ಯರ್ಥಿಗಳು ದ್ವಿತೀಯ ಪಿ.ಯು.ಸಿ. (10+2) ಅಥವಾ ಅದಕ್ಕೆ ತತ್ಸಮಾನವಾದ ಪರೀಕ್ಷೆಯಲ್ಲಿ ಉತ್ತೀರ್ಣರಾದವರಲ್ಲಿ ವಿಜ್ಞಾನ ವಿಭಾಗದ ಅಭ್ಯರ್ಥಿಗಳಿಗೆ ಮೊದಲ ಆದ್ಯತೆ ನೀಡಲಾಗುವುದು.

ಇ. ಅಭ್ಯರ್ಥಿಗಳು ಯಾವ ವರ್ಗದಲ್ಲಿ ಆಯ್ಕೆ ಬಯಸುವಿರೋ ಆ ವರ್ಗದ ಜಾತಿ ಮತ್ತು ಆದಾಯ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

ಎಫ್.ಅಭ್ಯರ್ಥಿಗಳು 1ನೇ ತರಗತಿಯಿಂದ 12ನೇ ತರಗತಿಯವರೆಗೆ ಕನಿಷ್ಟ 7 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿರಬೇಕು, 10 ರಿಂದ 12ನೇ ತರಗತಿಯನ್ನು ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿರಬೇಕು ಮತ್ತು ಅದಕ್ಕೆ ಸಂಬಂಧಿಸಿದ ವ್ಯಾಸಂಗ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.

ಜಿ. ಅಭ್ಯರ್ಥಿಗಳು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಪ್ರಥಮ ಹಾಗೂ ದ್ವಿತೀಯ ಪಿಯುಸಿ ಅಥವಾ ಅದಕ್ಕೆ ತತ್ಸಮಾನವಾದ ವ್ಯಾಸಂಗವನ್ನು ಮಾಡಿರಬೇಕು. ಅಥವಾ ಅಭ್ಯರ್ಥಿಯ ಪೋಷಕರು ಕರ್ನಾಟಕ ರಾಜ್ಯದಲ್ಲಿ ಕನಿಷ್ಟ 7 ವರ್ಷಗಳು ವ್ಯಾಸಂಗ ಮಾಡಿರುವ ಬಗ್ಗೆ ದೃಢೀಕರಣ ಪತ್ರ ನೀಡತಕ್ಕದ್ದು.

5) **ತರಬೇತಿಯ ಅವಧಿ:–** ಶುಶ್ರೂಷಾ ತರಬೇತಿ ಅವಧಿಯು ಮೂರು ವರ್ಷ ಆರು ತಿಂಗಳಾಗಿದ್ದು, ಸರ್ಕಾರಿ ನಿಯಮಗಳ ಪ್ರಕಾರ, ಸರ್ಕಾರಿ ಶುಶ್ರೂಷಾ ಶಾಲೆಗಳಲ್ಲಿ ವಿದ್ಯಾರ್ಥಿಗಳು ಶಿಷ್ಯವೇತನ ಪಡೆಯಲು ಅರ್ಹರಾಗಿರುತ್ತಾರೆ.

6) ತರಬೇತಿಗೆ ಗರ್ಭಿಣಿ ಅಭ್ಯರ್ಥಿಗಳಿಗೆ ಪ್ರವೇಶಕ್ಕೆ ಅವಕಾಶವಿರುವುದಿಲ್ಲ.
7) ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ಇಲಾಖಾ ಅಧಿಕಾರಿಗಳ ಮುಖಾಂತರ (ಹುದ್ದೆಗೆ ನೇಮಕಾತಿ ಮಾಡುವ ಅಧಿಕಾರವುಳ್ಳವರ ಮುಖಾಂತರ) ಅರ್ಜಿಗಳನ್ನು ಸಲ್ಲಿಸಬೇಕು.
8) ಅರ್ಜಿದಾರರ ಹಿಂದಿನ ಹುದ್ದೆಗೆ ಬಾಂಡ್ ಅವಧಿ ಮುಗಿದು 5 ವರ್ಷಕ್ಕೆ ಕಡಿಮೆಯಿಲ್ಲದೇ ಸರ್ಕಾರಿ ಸೇವೆ ಸಲ್ಲಿಸಿರಬೇಕು ಮತ್ತು ಖಾಯಂಪೂರ್ವಾ ಸೇವಾವಧಿ ಘೋಷಣೆಯಾಗಿರಬೇಕು. ಅದಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.
9) ಅರ್ಜಿದಾರರು ತಮ್ಮ ವಿರುದ್ದ ಯಾವುದೇ ರೀತಿಯ ಇಲಾಖಾ ವಿಚಾರಣೆ ಬಾಕಿ ಇಲ್ಲವೆಂದು ತಮ್ಮ ಮೇಲಾಧಿಕಾರಿಗಳಿಂದ ದೃಢೀಕರಣ ಪತ್ರ ಪಡೆದು ಅರ್ಜಿಯೊಂದಿಗೆ ಲಗತ್ತಿಸುವುದು.
10) ಮೇಲಿನ ಎಲ್ಲಾ ಮಾಹಿತಿಯೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಮೇಲಾಧಿಕಾರಿಗಳ ಮುಖಾಂತರ ಈ ನಿರ್ದೇಶನಾಲಯಕ್ಕೆ ನಿಗಧಿತ ದಿನಾಂಕದೊಳಗೆ ತಲುಪುವಂತೆ ಕಳುಹಿಸತಕ್ಕದ್ದು.
11) ಪ್ರತಿಯೊಂದು ಶುಶ್ರೂಷಾ ಶಾಲೆಯಲ್ಲಿರುವ ಒಟ್ಟು ತರಬೇತಿ ಸ್ಥಾನಗಳ ಪೈಕಿ ಶೇಕಡಾ 5ರಷ್ಟು ಪುರುಷ ಅಭ್ಯರ್ಥಿಗಳಿಗೆ ಆಯಾ ವರ್ಗಕ್ಕೆ ಅನುಸಾರವಾಗಿ 16(ಹದಿನಾರು) ಸ್ಥಾನಗಳನ್ನು ಮೀಸಲಿರಿಸಲಾಗಿದೆ.
12) ಮಾಜಿ ಸೈನಿಕರ ಮಕ್ಕಳಿಗೆ ಶೇಕಡಾ 1ರಂತೆ ಮೂರು ಸ್ಥಾನಗಳನ್ನು ಮೀಸಲಿರಿಸಲಾಗಿದೆ.
13) ದ್ವಿತೀಯ ಪಿ.ಯು.ಸಿ. ಯಲ್ಲಿ ಉತ್ತೀರ್ಣರಾದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಒಟ್ಟು ತರಬೇತಿ ಸ್ಥಾನಗಳಲ್ಲಿ ಶೇಕಡಾ 5ರಂತೆ 16(ಹದಿನಾರು) ಸ್ಥಾನಗಳನ್ನು ಮೀಸಲಿರಿಸಲಾಗಿದೆ.
14) ಹೊರನಾಡ ಕನ್ನಡಿಗರು / ಗಡಿನಾಡ ಕನ್ನಡಿಗರು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಕನ್ನಡ ಓದಲು ಬರೆಯಲು ಬರಬೇಕು. ತರಬೇತಿ ಆಯ್ಕೆಗೆ ಮುನ್ನ ಕನ್ನಡ ಪರೀಕ್ಷೆ ನಡೆಸಲಾಗುವುದು. ಅದರಲ್ಲಿ ಉತ್ತೀರ್ಣರಾದಲ್ಲಿ ಮಾತ್ರ ಆಯ್ಕೆಗೆ ಅರ್ಹರಾಗಿರುತ್ತಾರೆ.
15) ಮಹಿಳಾ ಅಭ್ಯರ್ಥಿಗಳಿಗೆ ಸರ್ಕಾರದ 09(ಒಂಭತ್ತು) ನರ್ಸಿಂಗ್ ಶಾಲೆಗಳಲ್ಲಿ ಆಯಾ ವರ್ಗಕ್ಕೆ ತಕ್ಕಂತೆ ಎಲ್ಲಾ ಪ್ರವರ್ಗಕ್ಕೆ ಸರ್ಕಾರಿ ಆದೇಶದನುಸಾರ ಮೀಸಲಿಡಲಾಗಿದೆ. (ಅನುಬಂಧ–1ರಲ್ಲಿ ವಿವರಿಸಿದೆ.)
16) ಅರ್ಜಿ ಸಲ್ಲಿಸಲಿಚ್ಚಿಸುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಿ.ಯು.ಸಿ. ಮತ್ತು ಎಸ್.ಎಸ್.ಎಲ್.ಸಿ ಅಂಕಪಟ್ಟಿ, ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ) ಇತ್ತೀಚಿನ ದೇಹ ಧಾರ್ಡ್ಯತೆ ಪ್ರಮಾಣ ಪತ್ರ, ಜಾತಿ ಹಾಗೂ ಆದಾಯ ಪ್ರಮಾಣ ಪತ್ರ (ತಹಸೀಲ್ದಾರರಿಂದ ಪ್ರಮಾಣೀಕರಿಸಿರಬೇಕು) ಇತ್ತೀಚಿನ ಭಾವಚಿತ್ರವನ್ನು ಹಾಗೂ ವ್ಯಾಸಂಗ ಪ್ರಮಾಣ ಪತ್ರ ಅರ್ಜಿಯೊಂದಿಗೆ ಕಡ್ಡಾಯವಾಗಿ ಲಗತ್ತಿಸಿರಬೇಕು.
17) ಅರ್ಜಿಯನ್ನು ಸ್ವಂತ ಬರವಣಿಗೆಯಿಂದ ಕನ್ನಡ ಭಾಷೆಯಲ್ಲಿ ಭರ್ತಿ ಮಾಡಬೇಕು.
18) ಎಲ್ಲಾ ರೀತಿಯಿಂದ ಕ್ರಮವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಪ್ರಮಾಣ ಪತ್ರಗಳ ನಕಲುಗಳೊಂದಿಗೆ ಅರ್ಜಿ ಪಡೆದ ಶುಶ್ರೂಷಾ ಶಾಲೆಗಳ ವಿಳಾಸಕ್ಕೆ ನಿಗಧಿಪಡಿಸಿದ ದಿನಾಂಕದೊಳಗೆ ಅರ್ಜಿಗಳನ್ನು ತಲುಪುವಂತೆ ಕಳುಹಿಸ ತಕ್ಕದ್ದು.
19) ಅರ್ಜಿ ಫಾರಂಗಳನ್ನೊಳಗೊಂಡ ಲಕೋಟೆಯ ಮೇಲೆ "*2008ನೇ ಸಾಲಿನ ಶುಶ್ರೂಷಾ ತರಬೇತಿ ಕೋರ್ಸಿಗೆ ಪ್ರವೇಶಕ್ಕಾಗಿ ಅರ್ಜಿ* " ಎಂಬುದಾಗಿ ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.
20) ಇಲಾಖಾ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಮೇಲಾಧಿಕಾರಿಗಳ ಮೂಲಕ ದಿನಾಂಕ: 7–6–2008ರೊಳಗಾಗಿ ಈ ನಿರ್ದೇಶನಾಲಯಕ್ಕೆ ತಲುಪುವಂತೆ ಕ್ರಮ ವಹಿಸತಕ್ಕದ್ದು.
21) ಮಾಜಿ ಸೈನಿಕರ ಮಕ್ಕಳ ಮೀಸಲಿರಿಸಿರುವ ಸ್ಥಾನಕ್ಕೆ ಸಲ್ಲಿಸಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳು ದಿನಾಂಕ: 7–6–2008ರ ಒಳಗಾಗಿ ಈ ನಿರ್ದೇಶನಾಲಯಕ್ಕೆ ಕಳುಹಿಸತಕ್ಕದ್ದು.
22) ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆದಾಗ ಅವರುಗಳಿಗೆ ಸ್ಥಳ ಮತ್ತು ದಿನಾಂಕವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅವರವರ ಸ್ವಂತ ರಜೆ ಮತ್ತು ಖರ್ಚಿನಲ್ಲಿ ಹಾಜರಾಗತಕ್ಕದ್ದು. ಎಸ್.ಎಸ್.ಎಲ್.ಸಿ. / ಪಿ.ಯು.ಸಿ. ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ.) ಇತ್ತೀಚಿನ ದೇಹ ಧಾರ್ಡ್ಯತೆ ಪ್ರಮಾಣ ಪತ್ರ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಮತ್ತು ವ್ಯಾಸಂಗ ಪ್ರಮಾಣ ಪತ್ರಗಳ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನದ ಸಮಯದಲ್ಲಿ ಕಡ್ಡಾಯವಾಗಿ ಹಾಜರು ಪಡಿಸತಕ್ಕದ್ದು.
23) ಶುಶ್ರೂಷಾ ತರಬೇತಿಗೆ ಆಯ್ಕೆಯಾಗಿ ತರಬೇತಿ ಪೂರ್ಣಗೊಳಿಸಿದ ಎಲ್ಲಾ ಅಭ್ಯರ್ಥಿಗಳಿಗೆ ಸರ್ಕಾರದಲ್ಲಿ ಸೇವೆ ಸಲ್ಲಿಸಲು ನೇಮಕ ಮಾಡಿಕೊಳ್ಳುವ ಖಾತರಿ ನೀಡುವುದಿಲ್ಲ. ತರಬೇತಿ ಅವಧಿಯಲ್ಲಿ ಶಿಷ್ಯವೇತನವನ್ನು ಪಡೆಯುವುದರಿಂದ, ಇಬ್ಬರು ಖಾಯಂ ರಾಜ್ಯ ಸರ್ಕಾರಿ ನೌಕರರ ಜಾಮೀನಿನಿಂದ ಕೂಡಿದ ಬಂಧಪತ್ರ ಸಲ್ಲಿಸಬೇಕು.
24) ಕೊನೆಯ ದಿನಾಂಕದ ನಂತರ ಬರುವ ಅಥವಾ ಅಪೂರ್ಣವಾದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು. ಈ ಸಂಬಂಧದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ. ತರಬೇತಿಗೆ ಸಂಬಂಧಪಟ್ಟ ಹೆಚ್ಚಿನ ವಿವರಗಳನ್ನು ಶುಶ್ರೂಷಾ ಶಾಲೆಯ ಮುಖ್ಯಸ್ಥರಿಂದ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆಯಬಹುದು.
25) ಈ ಮೂಲಕ ಎಲ್ಲಾ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಯನ್ನು ನಿಗಧಿತ ದಿನಾಂಕದೊಳಗೆ ನೀವು ಸೇರಲಿಚ್ಚಿಸುವ ಶುಶ್ರೂಷಾ ಶಾಲೆಗೆ ಕಳುಹಿಸತಕ್ಕದ್ದು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು.

**2008–09**

**ಅನುಬಂಧ–I**

ಸರ್ಕಾರಿ ಆದೇಶ ಸಂಖ್ಯೆ: ಸಇ/222/ಬಿಸಿಎ/20–9–94, ಸಂಖ್ಯೆ: ಸಕಇ/225/ಬಿಸಿಎ/2000 ದಿ: 30–3–02 ಮತ್ತು
ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 44 ಎಂಪಿಎಸ್ 2003(3) ದಿನಾಂಕ: 3–7–2003.

| ಕ್ರ. ಸಂ. | ತರಬೇತಿ ಶಾಲೆ ಹೆಸರು | ಪ್ರವೇಶ ಮಿತಿ | ಮಾಜಿ ಸೈನಿಕರ ಮಕ್ಕಳ ಮೀಸಲು ಸ್ಥಾನ 1% | ಪುರುಷ ಅಭ್ಯರ್ಥಿಗಳ ಮೀಸಲು ಸ್ಥಾನ 5% | ವರ್ಗಕ್ಕನುಸಾರವಾಗಿ | ಇಲಾಖಾ ಅಭ್ಯರ್ಥಿಗಳ (ಎ.ಎಸ್.ಎಂ) ಮೀಸಲು ಸ್ಥಾನ 5% | ಮಹಿಳಾ ಅಭ್ಯರ್ಥಿಗಳ ಮೀಸಲು ಸ್ಥಾನ | ಆಯಾ ವರ್ಗಕ್ಕನುಸಾರವಾಗಿ | | | | | | | |
|---|---|---|---|---|---|---|---|---|---|---|---|---|---|---|---|
| | | | | | | | | GM | I | 2A | 2B | 3A | 3B | SC | ST |
| **1** | ಬೌರಿಂಗ್ ಆಸ್ಪತ್ರೆ, ಬೆಂಗಳೂರು | **40** | **1** | **2** | **3ಬಿ/ಜಿಎಂ** | **2** | **35** | 19 | 1 | **5** | **1** | **1** | **2** | **5** | **1** |
| **2** | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು | **45** | **–** | **2** | **ಎಸ್‌ಸಿ/ಜಿಎಂ** | **2** | **41** | 20 | 2 | **6** | **2** | **2** | **2** | **6** | **1** |
| **3** | ಕೆ.ಆರ್. ಆಸ್ಪತ್ರೆ, ಮೈಸೂರು | **45** | **–** | **2** | **ಎಸ್‌ಟಿ/ಜಿಎಂ** | **2** | **41** | 20 | 2 | **6** | **2** | **2** | **2** | **6** | **1** |
| **4** | ವೆನ್‌ಲಾಕ್ ಆಸ್ಪತ್ರೆ, ಮಂಗಳೂರು | **35** | **–** | **2** | **2ಎ/ಜಿಎಂ** | **2** | **31** | 15 | 1 | **5** | **1** | **1** | 2 | **5** | **1** |
| **5** | ಜಿಲ್ಲಾ ಆಸ್ಪತ್ರೆ, ಬೆಳಗಾಂ | **35** | **–** | **2** | **2ಬಿ/ಜಿಎಂ** | **2** | **31** | 15 | 1 | **5** | **1** | **1** | 2 | **5** | **1** |
| **6** | ಜಿಲ್ಲಾ ಆಸ್ಪತ್ರೆ, ಬಿಜಾಪುರ | **30** | **–** | **2** | 3ಎ/ಜಿಎಂ | **2** | **26** | 13 | 1 | **4** | **1** | **1** | 1 | **4** | **1** |
| **7** | ಜಿಲ್ಲಾ ಆಸ್ಪತ್ರೆ, ಬಳ್ಳಾರಿ | **30** | **–** | 2 | ವರ್ಗ–1/ಜಿಎಂ | 2 | 26 | 13 | 1 | 4 | 1 | 1 | 1 | 4 | 1 |
| **8** | ಸಿ.ಜಿ. ಆಸ್ಪತ್ರೆ, ದಾವಣಗೆರೆ | **30** | **1** | **1** | ಎಸ್‌ಸಿ | **1** | **27** | 14 | 1 | **4** | **1** | **1** | 1 | **4** | 1 |
| **9** | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ | **20** | **1** | **1** | 2ಎ | **1** | **17** | 8 | 1 | **2** | 1 | 1 | 1 | **2** | 1 |
| | ಒಟ್ಟು | **310** | **3** | **16** | | **16** | **275** | 137 | 11 | **41** | **11** | **11** | 14 | **41** | **9** |

1. ಪುರುಷ ಅಭ್ಯರ್ಥಿಗಳು ಶೇ 5%
2. ಮಾಜಿ ಸೈನಿಕರ ಮಕ್ಕಳಿಗೆ ಶೇ 1%
3. ಸೇವಾನಿರತ ಅಭ್ಯರ್ಥಿಗಳು (ಕಿ.ಮ.ಆ.ಸ) ಶೇ 5%

ಪಿ.ಡಿ. 44.

ವೈದ್ಯಕೀಯ ಶಿಕ್ಷಣ ನಿರ್ದೇಶಕರು

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ರವರ ಕಛೇರಿ

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ2/ಬಿಯುಡಿ/ಕೆಎಸ್‌ಎಫ್‌ಎಂಬಿಸಿ/ಸಿಆರ್–153/2008–09, ದಿನಾಂಕ: 15ನೇ ಏಪ್ರಿಲ್ 2008**

**ವಿಷಯ:** 2008–09ನೇ ಸಾಲಿನಲ್ಲಿ ಕೆ.ಎಸ್.ಎಫ್.ಎಂ.ಬಿ.ಸಿ ಯೋಜನೆ ಲೆಕ್ಕ ಶೀರ್ಷಿಕೆಗಳಡಿ ಮುಂಗಡ ಕಾಮಗಾರಿಗಳ ಬಗ್ಗೆ ಟೆಂಡರ್.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಚನ್ನಪಟ್ಟಣ ವಲಯದ ತೆಂಗಿನಕಲ್ಲು ಎಸ್.ಎಫ್. ಅರಣ್ಯ ಪ್ರದೇಶದಲ್ಲಿ Ripping ಕಾಮಗಾರಿ ಕೈಗೊಳ್ಳುವ ಸಲುವಾಗಿ 2008–09ನೇ ಸಾಲಿಗೆ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ.

ದಿನಾಂಕ: 12.05.2008 ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು. ಅದೇ ದಿನ ಕೆಳಗೆ ಸಹಿ ಮಾಡಿದವರ ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಸದರಿ ದಿನಾಂಕದಂದು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆಗೆಯಲಾಗುವುದು ಮತ್ತು ಸದರಿ ದಿನಾಂಕದಂದು ಯಾವುದೇ ಟೆಂಡರ್ ಬಾರದಿದ್ದರೆ ಅಥವಾ ಕಾರಣಾಂತರಗಳಿಂದ ಟೆಂಡರ್ ನಡೆಯದೇ ಇದ್ದಲ್ಲಿ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ: 20.05.2008 ರಂದು ಅಪರಾಹ್ನ 3.00 ಗಂಟೆಗೆ ಎರಡನೇ ಬಾರಿಗೆ ನೊಂದಾಯಿತ ಇಚ್ಚೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು ಅದೇ ದಿನ 4.00 ಗಂಟೆಗೆ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕ ಪ್ರಕಟಣೆ ಹೊರಡಿಸಲಾಗುವುದಿಲ್ಲ.

**ಕಾಮಗಾರಿಯ ವಿವರ:–**

| ಕ್ರ. ಸಂ. | ವಲಯದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|
| 1 | ಚನ್ನಪಟ್ಟಣ | ತೆಂಗಿನ ಕಲ್ಲು ಎಸ್.ಎಫ್. ಅರಣ್ಯ ಪ್ರದೇಶದಲ್ಲಿ Ripping ಕಾಮಗಾರಿ | 5.0 | 5.40/– | 13,500/– | 3 ತಿಂಗಳು |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಫಾರಂಗೆ ರೂ. 200/– ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ: 12.05.2008 ಕಛೇರಿ ಕೆಲಸದ ವೇಳೆಯಲ್ಲಿ ಬೆಳಿಗ್ಗೆ 10.30 ಗಂಟೆಯಿಂದ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2008–09ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಬೇಕು. ತಪ್ಪಿದಲ್ಲಿ ಅಂತವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಮೊಹರು ಲಕೋಟೆಯಲ್ಲಿ ಪ್ರತ್ಯೇಕವಾಗಿ ಇಎಂಡಿಯನ್ನು ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 12.05.2008 ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 20.05.2008 ರಂದು ಅಪರಾಹ್ನ 4.00 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ದ ಕೆಲಸಗಳಾಗಿದ್ದು ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದು ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರ್‌ನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೆ ಸ್ವಂತವಾಗಿ ಮಾಡಿಕೊಳ್ಳಬೇಕು.

6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗಧಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗಧಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರಿಂದ ತಿಳಿವಳಿಕೆ ನೀಡಿದ 7 ದಿನಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು. ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರು ಹೊಂದಿರುತ್ತಾರೆ.
11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ./ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್ ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಢಿಪಾಲ್ಟ್‌ರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಕಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ದರಾಗಿರಬೇಕಾಗಿರುತ್ತದೆ.
19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ

ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶಿಷ್ಟ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇಕಡ 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿಯವರು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20. ಟೆಂಡರ್‌ನ್ನು ಕಂಪನಿಯ ವತಿಯಿಂದ / ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ
    ಅ) ಕಂಪನಿಯ / ಸಂಘ ಸಂಸ್ಥೆಗಳ ನೋಂದಾಯಿತ ಸಂಸ್ಥೆಗಳಾಗಿರಬೇಕು.
    ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (power of Attorney) ಪಡೆದುಕೊಂಡಿರಬೇಕು ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.
21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೋಂದಾಣಿ ನಿಯಮದಂತೆ ಸಂಘಗಳೂ ಕಡ್ಡಾಯವಾಗಿ ನೋಂದಾಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.
22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಗಳನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಮ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.
23. ಯಶಸ್ವಿ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇಕಡ 5 ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು, ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಅಧಿಕಾರಿಯಗಳಿಂದ ಧೃಡೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.
24. ಕೆಲಸ ಪೂರ್ಣಗೊಂಡ ದಿನಾಂಕದಂದು 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ / ಇನ್ನಿತರೆ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.
26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.
28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ದರಾಗಿರಬೇಕು.
29. 2008–09ನೇ ಸಾಲಿಗೆ ಅನುದಾನ ಲಭ್ಯವಾದಲ್ಲಿ ಈ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಕಾರ್ಯದೇಶವನ್ನು ನೀಡಲಾಗುವುದು. ಒಂದು ವೇಳೆ ಅನುದಾನ ಲಭ್ಯವಾಗದಿದಲ್ಲಿ ಕಾರ್ಯದೇಶವನ್ನು ನೀಡಲಾಗುವುದಿಲ್ಲ ಹಾಗೂ ಯಾವುದೇ ಬಡ್ಡಿ ನೀಡದೇ ಇ.ಎಂ.ಡಿ. ಹಣವನ್ನು ಹಿಂದಿರುಗಿಸಲಾಗುವುದು.
30. ಮೇಲ್ಕಾಣಿಸಿದ ಭೌತಿಕ ಗುರಿಯು ಅನುದಾನ ಹಂಚಿಕೆ ಆಧಾರದ ಮೇಲೆ ಕೈಗೊಳ್ಳಲಾಗುವುದು. ಒಂದು ವೇಳೆ ಅನುದಾನ ಹಂಚಿಕೆಯಲ್ಲಿ ವ್ಯತ್ಯಾಸವಾದರೆ ಭೌತಿಕ ಗುರಿಯು ಸಹ ವ್ಯತ್ಯಾಸಕ್ಕೆ ಒಳಪಟ್ಟಿರುತ್ತದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಪಿ.ಆರ್. 262 ರಾಮನಗರ ಪ್ರಾದೇಶಿಕ ವಿಭಾಗ,
ರಾಮನಗರ.

**ಕರ್ನಾಟಕ ಲೋಕ ಸೇವಾ ಆಯೋಗ "ಉದ್ಯೋಗ ಸೌಧ", ಬೆಂಗಳೂರು–560 001**

**ತಿದ್ದುಪಡಿ**

**ತಿದ್ದುಪಡಿ ಸಂಖ್ಯೆ: ಆರ್ (2) 1235/2008–09/ಪಿಎಸ್‌ಸಿ, ದಿನಾಂಕ: 6ನೇ ಮೇ 2008**

ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಸಮೂಹ ಎ, ಬಿ, ಸಿ ಗುಂಪಿನ ಹುದ್ದೆಗಳಿಗೆ ದಿನಾಂಕ 17.03.2008 ರಂದು ಅಧಿಸೂಚನೆ ಹೊರಡಿಸಿದ್ದು, ದಿನಾಂಕ: 20.03.2008ರ ರಾಜ್ಯ ಪತ್ರದ ಭಾಗ–5ರಲ್ಲಿ ಪ್ರಕಟಿಸಲಾಗಿರುತ್ತದೆ. ಅದರಲ್ಲಿ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಅವಧಿಯನ್ನು ಒಂದು ವರ್ಷ ಎಂದು ಪ್ರಕಟಿಸಿದ್ದು, ಸಂಬಂಧಪಟ್ಟ ಇಲಾಖೆಯ ಸ್ಪಷ್ಟೀಕರಣ ಮತ್ತು ಸರ್ಕಾರಿ ಆದೇಶ ಸಂಖ್ಯೆ AHF 150 VET 2002 Bangalore dated 24 May 2005 ರನ್ವಯ ತರಬೇತಿ ಅವಧಿಯನ್ನು 2 ವರ್ಷ ಎಂದು ತಿದ್ದುಪಡಿ ಮಾಡಿರುವುದು ಈ ಕೆಳಗಿನಂತಿರುತ್ತದೆ.

ಪುಟ ಸಂಖ್ಯೆ 553 – ಕ್ರಮ ಸಂಖ್ಯೆ 1463 – 1762ರಲ್ಲಿ ಪ್ರಕಟಿಸಿದ್ದಾರೆ.

ಪರಿಷ್ಕೃತ ಬದಲಾವಣೆಯನ್ನು ಈ ಕೆಳಗಿನಂತೆ ಓದಿಕೊಳ್ಳುವುದು:–

Must have passed PUC with Biology as one of the subjects; and

a) Must undergo training in Dairy and Poultry in an institution recognized by the Govt., after appointment as Veterinary Inspectors.

b) Must undergo Veterinary Inspectors training of Two year duration conducted by the Department of Animal Husbandry and Veterinary Services, Government of Karnataka, after appointment as Veterinary Inspectors.

**ಹೆಚ್.ಬಿ. ಚನ್ನರಾಜು**

ಪಿ.ಆರ್. 279

ಕಾರ್ಯದರ್ಶಿ (ಪ್ರಭಾರ),

ಕರ್ನಾಟಕ ಲೋಕ ಸೇವಾ ಆಯೋಗ.

**KARNATAKA STATE BOARD OF WAKFS**

**[constituted by the Government of Karnataka under the Wakf Act, 1995**

**(CENTRAL ACT - 43 OF 95)]**

**Darul Awkaf, No. 6, Cunningham Road, Bangalore-560 052**

**CORRIGENDUM**

**No.KTW/CMC/2/DKD/05-06, Dated; 26th March 2007**

**Sub:** Amalgamation of Momin Jumma Masjid & Jamathul Muslimeen Masjid, Kudroli, Mangalore.

**Ref:**
1. Letter dated 22.09.2006 of the President, Jamia Masjid, Kudroli, Mangalore.
2. This officer Order of even No. dated 26.09.2006.
3. This office Public Notice of even No. dated 19.10.06.

**PREAMBLE:**

Whereas, the institution Momin Jumma Masjid & Jamathul Muslimeen Masjid, Kudroli, Mangalore, has been notified in the Gazette Notification of Dakshina Kannada District at Sl.No. 37 & 38 vide Notification No.MWB/20(2)1996 dated 18.8.1996. The President, Jamia Masjid, Kudroli, vide his letter dated 22.09.2006 has informed that the General Body of both the Momin Jumma Masjid & Jamathul Muslimeen Masjid, held a Joint General Body Meeting on 17.09.2006 and they have resolved to Amalgamate these two (2) Mosques and its allied properties as one and have decided to name the combined Mosque as 'Jamia Masjid", Kudroli. In this behalf this office has issued order of even No. dated 26.09.2006 Amalgamate the two Mosques as one. It is felt necessary to club the immovable properties of two (2) Mosques as one entity and to issue Corrigendum in this behalf. A Public Notice referred at reference (3) above was issued. But due to some discrepancies in the same were deserved with regard to listing of properties. Hence the above Public Notice was withdrawn. After making necessary correction a fresh Public Notice of even No. dated 7.2.2007 was issued by this office calling objection/suggesions if any to the said proposal within fifteen days from the date of Publication.

Whereas the Wakf Officer, District Wakf Advisory Committee, Dakshina Kannada vide their report No. DWAC/DK/13/06-07 dated 28.2.2007 has reported that objections or suggestions have not been received in response to the said public notice and has thus requested to issue necessary orders. Hence, this Corrigendum.

| Existing entries | | | | Read the correct entries | | | |
|---|---|---|---|---|---|---|---|
| Sl.No. of Survey List | | Name of the Wakf Sunni or Shia specified Location. | Description of Wakf Properties & Particulars etc. | Sl.No. of Survey List | Name of the Wakf Sunni or Shia specified Location. | Description of Wakf Properties & Particulars etc. | |
| I | 38 | Momin Jumma Masjid, Kudroli, Mangalore | Patta No. 136, in Mangalore Kasaba 436 (1,238) Dry 0-01G. | 37 & 38 | Jamia Masjid, Kudroli Mangalore | 1. | Patta No. 136, Mangalore Kasba. 436 (1,238) Dry 1 Cents. |
| II | 37 | Jamathul Muslimeen Masjid, Kudroli, Mangalore | Patta 810 Mangalore Kasaba & Bolar 12-2 (1-Garden 175-B2) 0-12G. Patta No. 180. 432 (1,235) Dry 0-22G Patta No.136. | | | 2. | Patta No. 810 Mangalore Kasaba & Bolar 12-2 (1-Garden 175-B2) 12 Cents. Patta No.180. 432 (1,235) Dry 22 cents Patta No. 136. |
| III | (Kitabul Awkaf) Sl.No.526 | Momin Jumma Masjid, Kudroli, Mangalore. | Sy.No.1-35-1175-B1 Kasaba Bazar, Mangalore. Measuring: 1A-28 Cents. Bounded by: East: Road Well West: Sy.No.1237 North:Patta Land of Buden Sab. South:Road. | Kitabul Awkaf Sl.No.526 | | 3. | Sy.No.1-35-1175-B1 Kasaba Bazar, Mangalore Measuring: 1A-28Cents. Bounded by: East: Road Well West: Sy.No. 1237 North:Patta Land of Buden Sab South: Road. |
| | | | Sy.No. 1237 Bellur Village. Measuring: 0A-41 Cents. Bounded by: East:Sy.No.1175/ B-1 West:Sy.No.1236 North:Sy.No.1134 South:Karbala Road. | | | 4. | Sy.No.1237 Bolur Village Measuring: 0A-41 Cents. Bounded by: East:Sy.No.1175/B-1 West:Sy.No.1236. North: Sy.No.1134. South: Karbala Road. |
| IV | 630 | Momin Jumma Masjid, Kudroli, Mangalore | T.S. No. 1177, R.S. No. 3 Kasaba Bazar, Mangalore. Measuring: 0A-40 Cents. Bounded by: East:Property belongs to Bavajan Sab. West: Road. North: Barke Road. South:Sy.No. 1175 (burial ground) | 630 | | 5. | T.S. No. 1177, R.S. No. 3, Kasaba Bazar, Mangalore. Measuring: 0A-40 Cents. Bounded by: East: Property belongs to Bavajan Sab West: Road. North: Barke Road. South: Sy.No. 1175 (Burial Ground). |

This Order is issued as per the powers delegated in Order No. KBW/110/ADM/05-06 dated 2.3.06 of Karnataka State Board of Wakfs, Bangalore.

Addl. Chief Executive Officer,
Karnataka State Board of Wakfs.

P.D. 35